# ಟಂಕಾಧಿಕಾರಿ ಏಚಿಸೆಟ್ಟಿ

ಡಾ॥ ಎ.ವಿ. ನರಸಿಂಹಮೂರ್ತಿ

ಶಾಸನಗಳಲ್ಲಿ ನಾಣ್ಯಶಾಸ್ತ್ರಕ್ಕೆ ಸಂಬಂಧಿಸಿದ ಮಾಹಿತಿಗಳು ಹೇರಳವಾಗಿ ದೊರಕುತ್ತವೆಯಾದರೂ, ಅವುಗಳನ್ನು ನಾಣ್ಯಶಾಸ್ತ್ರಜ್ಞರು ಸರಿಯಾಗಿ ಬಳಸಿಕೊಂಡಿಲ್ಲವೆಂದರೆ ತಪ್ಪಾಗಲಾರದು.[1] ವಿವಿಧ ನಾಣ್ಯಗಳ ಹೆಸರುಗಳು, ಅವುಗಳ ಪ್ರಭೇದಗಳು, ಟಂಕಶಾಲೆಯ ಹೆಸರುಗಳು ಮುಂತಾದ ಮಾಹಿತಿಗಳು ಶಾಸನಗಳಲ್ಲಿ ಪ್ರಾಸಂಗಿಕವಾಗಿ ಕಾಣ ಬರುತ್ತವೆ.[2] ಅದೇ ರೀತಿಯಲ್ಲಿ ಟಂಕಶಾಲೆಯ ಮೇಲ್ವಿಚಾರಣೆಯನ್ನು ನೋಡಿಕೊಳ್ಳುತ್ತಿದ್ದ ಅಧಿಕಾರಿಗಳ ವಿಷಯವೂ ಕೆಲವು ಶಾಸನಗಳಲ್ಲಿ ಉಲ್ಲೇಖಿತವಾಗಿವೆ. ಇಂತಹ ಒಬ್ಬ ಟಂಕಾಧಿಕಾರಿ ಏಚಿಸೆಟ್ಟಿ. ಇವನ ವಿಷಯ ಮುಮ್ಮಡಿ ತೈಲನ ನರಗುಂದದ ಶಾಸನವೊಂದರಲ್ಲಿ ವಿವರವಾಗಿ ಹೇಳಲ್ಪಟ್ಟಿದೆ.[3] ಈ ಶಾಸನ ನರಗುಂದದಲ್ಲಿರುವ ಚಾಲುಕ್ಯ ದೊರೆ ಮುಮ್ಮಡಿ ತೈಲನ ಕಾಲಕ್ಕೆ ಸೇರಿದ್ದು, ಅಲ್ಲಿನ ಶಂಕರಲಿಂಗ ದೇವಾಲಯದ ರಂಗ ಮಂಟಪದಲ್ಲಿದೆ. ಶಾಸನದಲ್ಲಿ ಕಾಲದ ಉಲ್ಲೇಖವಿಲ್ಲ.

ಈ ಶಾಸನದ ಮುಖ್ಯ ಉದ್ದೇಶವೆಂದರೆ, ನರಗುಂದದ ಒಂದು ಭಾಗವಾದ ಹೇಮಂಗೇರಿಯಲ್ಲಿ ವಾಸವಾಗಿದ್ದ ಕುಪ್ಪಟಿ ಏಚಿಸೆಟ್ಟಿಯು ಬಡ ಜನಗಳ ಊಟಕ್ಕಾಗಿ ಕೊಟ್ಟ ದಾನಗಳ ವಿವರಗಳನ್ನು ತಿಳಿಸುವುದು. ಏಚಿಸೆಟ್ಟಿಯ ವಂಶಾವಳಿಯೂ ಹೇಳಲ್ಪಟ್ಟಿದೆ. ಅದು ಹೀಗೆ ಕಂಡಂತೆ ಇದೆ.

ಮಹದೇವ ಸೆಟ್ಟಿ — ದೇವ ಕಬ್ಬೆ
| ಮಗ
ಐಚಿ ಸೆಟ್ಟಿ — ಮಲ್ಲಿ ಕಬ್ಬೆ
|
ಅರ್ಜುನ ಸೆಟ್ಟಿ —
| ತಮ್ಮ
ಏಚಿ ಸೆಟ್ಟಿ — ಗೊಜ್ಜಿ ಕಬ್ಬೆ

ಏಚಿಸೆಟ್ಟಿಯು ಬಹಳ ಪ್ರಾಮಾಣಿಕನಾಗಿಯೂ, ಒಳ್ಳೆಯ ನಡತೆಯುಳ್ಳವನಾಗಿಯೂ, ಯಾವ ವಿಧವಾದ ಕೆಟ್ಟ ಗುಣಗಳೂ ಅವನಲ್ಲಿ ಕಾಣದೇ ಇದ್ದುದರಿಂದ, ಇವನೇ ಟಂಕಾಧಿಕಾರಿಯ ಕೆಲಸಕ್ಕೆ ಯೋಗ್ಯನಾದ ವ್ಯಕ್ತಿಯೆಂದು ತೈಲ ಮಹಾರಾಜನು ಇವನನ್ನು ಆ ಕೆಲಸಕ್ಕೆ ನಿಯಮಿಸಿದನು. ಅದಕ್ಕನುಗುಣವಾಗಿ ಕಾರ್ಯವನ್ನು ಏಚಿಸೆಟ್ಟಿಯು ನಿರ್ವಹಿಸಿದನು. ಅದನ್ನು ಗಮನಿಸಿದ ತೈಲನು ಇವನಿಗೆ ಹೇಮಕುಪ್ಪಟಿ ಎಂಬ ಬಿರುದನ್ನು ಕೊಟ್ಟನು. ಇವನು ಕುಪ್ಪಟಿ ಏಚಿಸೆಟ್ಟಿ ಎಂಬ ಹೆಸರಿನಿಂದ ಪ್ರಖ್ಯಾತಿಯನ್ನು ಪಡೆದನು.

1 ಇತ್ತೀಚೆಗೆ ಈ ವಿಷಯದಲ್ಲಿ ಆಸಕ್ತಿ ಹೆಚ್ಚುತ್ತಿದೆ ಎಂಬುದು ಸಮಾಧಾನದ ಅಂಶ. ಕರಾಷಿಮ ಅವರಿಂದ ಸಂಪಾದಿಸಲ್ಪಟ್ಟ ಗ್ರಂಥ. 'ಇಂಡಸ್‌ವ್ಯಾಲಿ ಟು ಮೆಕಾಂಗ್ ಡೆಲ್ಟ ; ಇದರಲ್ಲಿ ಎ.ವಿ. ನರಸಿಂಹಮೂರ್ತಿ ; ದಿ ರೋಲ್ ಆಫ್ ಎಪಿಗ್ರಫಿ ಇನ್ ದಿ ಸ್ಟಡಿ ಆಫ್ ಸೌತ್ ಇಂಡಿಯನ್ ನ್ಯೂಮಿಸ್‌ಮ್ಯಾಟಿಕ್ಸ್ ಪು. ೭೭-೮೬

2 ಇತಿಹಾಸ ದರ್ಶನ, ಸಂ. ೩, ಸಂಚಿಕೆ ೧, ಪು. ೨೧೯-೨೨೪ "ಶಾಸನೋಕ್ತ ಗದ್ಯಾಣ ಪ್ರಭೇದಗಳು"

3 ಸೌತ್ ಇಂಡಿಯನ್ ಇನ್ಸ್‌ಕ್ರಿಪ್ಷನ್ಸ್, ಸಂ. ೧೮, ಶಾಸನ ಸಂಖ್ಯೆ ೧೬೦

ಏಚಿಸೆಟ್ಟಿಯನ್ನು ಅಚ್ಚಿನ ಅಧಿಕಾರಿ ಎಂದು ಕರೆಯಲಾಗಿದೆ. ಇವನು ನಾಣ್ಯಗಳ ಶುದ್ಧಾ ಶುದ್ಧತೆಯನ್ನು ತೀರ್ಮಾನಿಸುವಲ್ಲಿ ಪರಿಣತಿಯನ್ನು ಹೊಂದಿದ್ದನು. ಅದರಿಂದಾಗಿ ಈ ಕೆಲಸಕ್ಕೆ ಇವನೇ ಯೋಗ್ಯನೆಂದು ತೀರ್ಮಾನ ಮಾಡಲಾಯಿತು. ಇಲ್ಲಿ ಬಳಸಲಾಗಿರುವ ಪದ ಅಚ್ಚು ಎನ್ನುವುದು ಗಮನಾರ್ಹ. ಅಚ್ಚು ಎನ್ನುವ ಪದಕ್ಕೆ ಎರಡು ಅರ್ಥಗಳನ್ನು ಹೇಳಬಹುದು. ಮೊದಲನೆಯದಾಗಿ ಮರದಲ್ಲಿಯೋ, ಮಣ್ಣಿನಲ್ಲಿಯೋ, ಲೋಹದಲ್ಲಿಯೋ ಆಕಾರವನ್ನು ಕೊರೆದು ಅದರಲ್ಲಿ ಎರಕದ ದ್ರವ್ಯವನ್ನು ಹುಯ್ದು ಬಿಂಬವನ್ನು ಮಾಡಿಕೊಳ್ಳುವ ಸಾಧನ.[4] ಕಟ್ಟೆ ತೊಣೆಯಲ್ಲಿದ್ದ ಟಂಕಶಾಲೆಯಲ್ಲಿ ನವಿಲಿನ ಅಚ್ಚನ್ನು ಹೊಂದಿದ್ದ ನಾಣ್ಯಗಳನ್ನು ಲೊಕ್ಕಿ ಗದ್ಯಾಣಗಳನ್ನಾಗಿ ಪರಿವರ್ತಿಸುವುದೇ ಮುಖ್ಯವಾದ ಕೆಲಸವಾಗಿದ್ದಿತೆಂದು ಶಾಸನವೊಂದು ತಿಳಿಸುತ್ತದೆ.[5] ಇದರಲ್ಲಿ ನವಿಲಚ್ಚಿನ ಪೊನ್ ಅಂದರೆ ನವಿಲಿನ ಚಿತ್ರವನ್ನು ಹೊಂದಿದ್ದ ಪೊನ್ ನಾಣ್ಯವೆಂಬುದು ಖಚಿತವಾಗುತ್ತದೆ. ಅಚ್ಚಿನ ಮೊಳೆ, ಅಚ್ಚಿನ ಕಾಣೆ ಮುಂತಾದ ಪದಗಳು ನಾಣ್ಯ ತಯಾರಿಕೆಯಲ್ಲಿ ಉಪಯೋಗದಲ್ಲಿದ್ದ ಸಾಧನಗಳೆಂದು ಮತ್ತೊಂದು ಶಾಸನದಿಂದ ತಿಳಿಯ ಬರುತ್ತದೆ.[6]

ಅಚ್ಚು ಎನ್ನುವ ಪದ ಇನ್ನೊಂದು ಅರ್ಥದಲ್ಲಿ ನಾಣ್ಯವನ್ನು ನಿರ್ದೇಶಿಸುತ್ತದೆ. ಕ್ರಿ.ಶ. ೧೧೩೩ರ ಶಾಸನದಲ್ಲಿ ಎರಡು ಅಚ್ಚುಗಳನ್ನು ದಾನ ಮಾಡಿದ ಸಂಗತಿಯನ್ನು ತಿಳಿಸುತ್ತದೆ.[7] ಮತ್ತೊಂದು ಶಾಸನ ಹನ್ನೆರಡು ಸಾವಿರ ಅಚ್ಚಿನ ದಾನವನ್ನು ಹೇಳುತ್ತದೆ.[8] ಚೋಳರ ಕಾಲದ ತಮಿಳು ಶಾಸನಗಳಲ್ಲಿಯೂ ಅಚ್ಚು ಎನ್ನುವ ಪದ ನಾಣ್ಯ ಎಂಬ ಅರ್ಥದಲ್ಲೇ ವಿಶೇಷವಾಗಿ ಬಳಕೆಯಾಗಿದೆ. ಉದಾಹರಣೆಗೆ ಚೋಳರಾಜ ರಾಜನ ಶ್ರೀರಂಜನ್ ಶಾಸನದಲ್ಲಿ ಅಚ್ಚುಗಳನ್ನು ದಾನವಾಗಿ ಕೊಟ್ಟ ವಿಷಯ ಪ್ರಸ್ತಾಪಿತವಾಗಿದೆ. ತಿರುವಾಂಕೂರಿನ ಇತ್ತೀಚಿನ ಶಾಸನಗಳಲ್ಲಿಯೂ ಅಚ್ಚು ಎನ್ನುವ ಪದ ನಾಣ್ಯ, ಅದರಲ್ಲಿಯೂ ವಿಶೇಷವಾಗಿ ಚಿನ್ನದ ನಾಣ್ಯದ ಅರ್ಥದಲ್ಲಿಯೇ ಬಳಕೆಯಾಗಿದೆಯೆಂದು ಕೆ.ಜಿ. ಕೃಷ್ಣನ್ ಹೇಳಿದ್ದಾರೆ.[9] ಮರಾಠೀ ಗ್ರಂಥ ದ್ರವ್ಯ ಪರೀಕ್ಷೆಯಲ್ಲಿ ಠಕ್ಕೂರಫೇರು, ಸೇವುಣರ ನಾಣ್ಯಗಳನ್ನು ಹೇಮಾಚ್ಚು ಎಂದು ಕರೆದಿದ್ದಾನೆ.[10] ಈ ಎಲ್ಲ ಉಲ್ಲೇಖಗಳನ್ನೂ ಗಮನಿಸಿದರೆ. ಅಚ್ಚಿನಿಂದ ತಯಾರಾದ, ಪಂಚ್ ಮಾರ್ಕ್ ತಾಂತ್ರಿಕತೆಗೆ ವಿರುದ್ಧವಾದ ನಾಣ್ಯಗಳನ್ನು ಅಚ್ಚು ಎಂದು ವ್ಯವಹರಿಸುತ್ತಿದ್ದರು ಎಂಬುದು ಗೊತ್ತಾಗುತ್ತದೆ. ಆದುದರಿಂದ ಅಚ್ಚಿನ ಅಧಿಕಾರಿ ಎಂದರೆ ನಾಣ್ಯದ ಅಧಿಕಾರಿ ಅಥವಾ ಟಂಕಶಾಲೆಯ ಅಧಿಕಾರಿ ಎಂದು ಅರ್ಥ ಮಾಡಬಹುದು.

ಇಲ್ಲಿ ಗಮನಿಸಬೇಕಾದ ಇನ್ನೊಂದು ಪದವೆಂದರೆ ಕುಪ್ಪಟಿ, ಅಂದರೆ ಕಬ್ಬಿಣದ ಒಲೆ ಅಥವಾ ಅಗ್ಗಿಷ್ಟಿಕೆ. ಇದು ಯಾವ ರೀತಿ ನಾಣ್ಯಾಧಿಕಾರಿಯ ಸಾಧನಗಳಲ್ಲಿ ಮುಖ್ಯವಾಗಿದ್ದಿತು ಎಂಬುವುದು ಗಮನಿಸಬೇಕಾದ ಅಂಶ. ಏಚಿ ಸೆಟ್ಟಿಗೆ ಹೇಮಕುಪ್ಪಟಿ ಎಂಬ ಬಿರುದನ್ನು ಕೊಡಲಾಯಿತು ಎಂದೂ, ಇದರಿಂದಾಗಿ ಇವನು ಕುಪ್ಪಟಿ ಏಚಿಸೆಟ್ಟಿ ಎಂಬ ಹೆಸರಿನಿಂದ ಖ್ಯಾತನಾಗಿದ್ದನು ಎಂದು ಶಾಸನ ತಿಳಿಸುತ್ತದೆ. ಬಹುಶಃ ಇದು ಸಾಮಾನ್ಯವಾದ ಒಲೆ ಅಥವಾ ಅಗ್ಗಿಷ್ಟಿಕೆಯಾಗಿರದೆ, ನಾಣ್ಯಗಳ ಶುದ್ಧತೆಯನ್ನು ತಿಳಿಯುವಲ್ಲಿ ಉಪಯೋಗದಲ್ಲಿದ್ದ ಒಂದು ಸಾಧನ ವಿಶೇಷವಾಗಿರಬೇಕೆಂದು ಊಹಿಸಬಹುದು. ಪ್ರಾಚೀನ ಕಾಲದಲ್ಲಿ ನಾಣ್ಯಗಳ ಶುದ್ಧತೆಯನ್ನು ಪರೀಕ್ಷೆ ಮಾಡುವಾಗ ಈ ರೀತಿಯ ಸಾಧನಗಳನ್ನು ಬಳಸುತ್ತಿದ್ದರು ಎಂದು ವಿಜಯನಗರವನ್ನು ಸಂದರ್ಶಿಸಿದ ಅನೇಕ ಇತಿಹಾಸಕಾರರು ಹೇಳಿದ್ದಾರೆ.[11]

---

4 ಕನ್ನಡ ನಿಘಂಟು, ಸಂ. ಪು. ೯೮,
5 ಸೌ.ಇಂ.ಇ., ಸಂ. ೯, ಭಾಗ ೧. ಶಾಸನ ೧೬೪
6 ಅದೇ
7 ಅದೇ, ಶಾಸನ ೨೨೮, 'ತುಂಬಳ ಬೀಡಿನ ಶ್ರೀ ಪಂಚಲಿಂಗ ದೇವರ ಅಂಗ ಭೋಗ ರಂಗಕ್ಕಂ ಎರಡು ಅಚ್ಚು.'
8 ಹನ್ನೆರಡು ಸಾವಿರ ಅಚ್ಚಿಂ ಕೊಟ್ಟು...
9 ಎಪಿಗ್ರಾಫಿಯ ಇಂಡಿಕ, ಸಂ. ೩೩, ಪು. ೧೬೦
10 ನ್ಯೂಮಿಸ್‌ಮ್ಯಾಟಿಕ್ ಡೈಜೆಸ್ಟ್, ಸಂ. ೪, ಭಾಗ ೧, ಪು. ೩೦
11 ಬಾರ್ಬೋಸ ಅವರ ಗ್ರಂಥ, ಸಂ. ೧, ಪು. ೧೫೬, ವರ್ತೆಮ, ಪು. ೧೨೧

ನರಗುಂದದಲ್ಲಿ ಈ ಟಂಕಶಾಲೆಯಿದ್ದ ಸ್ಥಳಕ್ಕೆ ಹೇಮಗಿರಿ ಎಂಬ ಹೆಸರು ಇದ್ದುದನ್ನು ಗಮನಿಸಬೇಕು. ಚಿನ್ನದ ನಾಣ್ಯಗಳನ್ನು ತಯಾರು ಮಾಡುತ್ತಿದ್ದ ಸ್ಥಳ ಇದ್ದುದರಿಂದ ಇದಕ್ಕೆ ಹೇಮಗಿರಿ ಎಂಬ ಹೆಸರು ಬಂದಿರುವುದು ವೇದ್ಯನಾಗುತ್ತದೆ. ಸ್ಥಳನಾಮ ಅಧ್ಯಯನಕ್ಕೆ ಇದೊಂದು ಉತ್ತಮವಾದ ಮಾಹಿತಿಯಾಗಿದ್ದು, ಈ ರೀತಿಯ ಸ್ಥಳನಾಮಗಳು ಇರುವ ಜಾಗಗಳಲ್ಲಿ ಟಂಕಶಾಲೆಯಿದ್ದಿತೇ ಎಂಬುದು ವಿಚಾರ ಯೋಗ್ಯ ಸಂಗತಿ. ಪ್ರಾಚೀನ ನಾಣ್ಯಗಳ ಮೇಲೆ ಟಂಕಶಾಲೆಯ ಹೆಸರು ಉಲ್ಲೇಖಿತವಾಗದೇ ಇರುವುದರಿಂದ, ಟಂಕಶಾಲೆಗಳು ಎಲ್ಲೆಲ್ಲಿದ್ದವು ಎಂಬುದನ್ನು ತಿಳಿಯಲು ಸರಿಯಾದ ಮಾಹಿತಿಗಳು ದೊರಕುವುದು ಬಲು ಕಷ್ಟ.[12] ಹೀಗಾಗಿ ಕಲ್ಯಾಣದ ಚಾಲುಕ್ಯರ ಕಾಲದ ಟಂಕಶಾಲೆಗಳು ಇದ್ದ ಎಲ್ಲ ಸ್ಥಳಗಳ ಹೆಸರುಗಳೂ ನಮಗೆ ದೊರಕಿಲ್ಲ.[13] ಇಂತಹ ಪರಿಸ್ಥಿತಿಯಲ್ಲಿ ಈ ಶಾಸನ, ಚಾಲುಕ್ಯರ ಕಾಲದಲ್ಲಿ ನರಗುಂದದ ಹೇಮಗಿರಿಯಲ್ಲಿ ಒಂದು ಟಂಕಶಾಲೆಯಿದ್ದಿತು ಎನ್ನುವ ವಿಷಯವನ್ನು ತಿಳಿಸುತ್ತದೆ. ಒಟ್ಟಿನಲ್ಲಿ ನಾಣ್ಯಶಾಸ್ತ್ರ ಅಧ್ಯಯನಕ್ಕೆ ವಿಶಿಷ್ಟ ಕೊಡುಗೆಯನ್ನು ಈ ಶಾಸನ ಕೊಡುತ್ತದೆ. ○

---

12 ಸಾಮಾನ್ಯವಾಗಿ ಮುಹಮ್ಮದೀಯರ ನಾಣ್ಯಗಳ ಮೇಲೆ ಟಂಕಶಾಲೆಯ ಹೆಸರು ಇರುತ್ತದೆ

13 ಈ ಕಾಲದಲ್ಲಿ ಟಂಕಶಾಲೆಗಳು ಲೊಕ್ಕಿಗುಂಡಿ, ಸೂಡಿ, ಲಕ್ಕುಂಡಿ, ಕುಡಿತಿಣಿಗಳಲ್ಲಿದ್ದವು. ಎ.ವಿ. ನರಸಿಂಹ ಮೂರ್ತಿ : ಕಾಯಿನ್ಸ್ ಆಫ್ ಕರ್ನಾಟಕ, ಪು. ೭೮